

# ಸರಳ ಸಂಸ್ಕೃತ ಶಿಕ್ಷಕ

(ಕನ್ನಡ)

## ಭಾಗ ೩

ತೃತೀಯ ಸಂಸ್ಕರಣ

ಭಾರತೀಯ ವಿದ್ಯಾಭವನದ ಮೂಲಕ ನಡೆಸಲ್ಪಡುವ
(ಸಂಸ್ಕೃತ-ಪರೀಕ್ಷಾ-ವಿಭಾಗ)

ಸಂಪಾದಕರು :
ಜಯಂತಕೃಷ್ಣ ಹ. ದವೆ, ಮಾ. ನಿಯಾಮಕ ಭಾ. ವಿ. ಭ.
ವೆಂಕಟೇಶ್ವರ ದೀಕ್ಷಿತರು, ಆಚಾರ್ಯ ಮು. ಸಂ. ಮ.
ಮಹೇಶಚಂದ್ರ ಶಾಸ್ತ್ರಿ, ವಿದ್ಯಾಭಾಸ್ಕರ, ಪರೀಕ್ಷಾ ಮಂತ್ರಿ

ಮೂಲ್ಯ : ೫೦ ಪೈಸೆ

ಭಾರತೀಯ ವಿದ್ಯಾಭವನ
ಚೌಪಾಟೀ ರಸ್ತೆ : : ಬೊಂಬಾಯಿ-೭

ಪ್ರಕಾಶಕರು :
ಎಸ್. ರಾಮಕೃಷ್ಣನ್
ಭಾರತೀಯ ವಿದ್ಯಾಭವನ,
ಚೌಪಾಟೀ ರಸ್ತೆ, ಬೊಂಬಾಯಿ—೭

ಪ್ರಥಮ ಸಂಸ್ಕರಣ : ೧೯೫೯
ಪರಿಷ್ಕೃತ ತೃತೀಯ ಸಂಸ್ಕರಣ : ೧೯೬೮
(೨೫೦೦ ಪ್ರತಿಗಳು)

ಮುದ್ರಕರು :
ಸಾಧನಾ ಮುದ್ರಣಾಲಯ,
೬೬/೧, ೫ನೇ ಮೇಯಿನ್ ರಸ್ತೆ,
ಗಾಂಧಿನಗರ, ಬೆಂಗಳೂರು-೯.

# ಸರಳ ಸಂಸ್ಕೃತ ಶಿಕ್ಷಕ

( ಕನ್ನಡ )

ಭಾಗ ೩

ತೃತೀಯ ಸಂಸ್ಕರಣ

ಭಾರತೀಯ ವಿದ್ಯಾಭವನದ ಮೂಲಕ ನಡೆಸಲ್ಪಡುವ
( ಸಂಸ್ಕೃತ–ಪರೀಕ್ಷಾ–ವಿಭಾಗ )

ಮೂಲ್ಯ : ೫೦ ಪೈಸೆ

ಭಾರತೀಯ ವಿದ್ಯಾಭವನ
ಚೌಪಾಟೀ ರಸ್ತೆ : : ಬೊಂಬಾಯಿ-೭

ಪ್ರಕಾಶಕರು:
ಎಸ್. ರಾಮಕೃಷ್ಣನ್
ಭಾರತೀಯ ವಿದ್ಯಾಭವನ
ಚೌಪಾಟೀ ರಸ್ತೆ, ಬೊಂಬಾಯಿ—೭



ಸಂಪಾದಕರು:
**ಜಯಂತಕೃಷ್ಣ ಹ. ದವೆ, ಮಾ. ನಿಯಾಮಕ ಭಾ. ವಿ. ಭ.**
**ವೆಂಕಟೇಶ್ವರ ದೀಕ್ಷಿತರು, ಆಚಾರ್ಯ ಮು. ಸಂ. ಮ.**
**ಮಹೇಶಚಂದ್ರ ಶಾಸ್ತ್ರಿ, ವಿದ್ಯಾಭಾಸ್ಕರ, ಪರೀಕ್ಷಾ ಮಂತ್ರಿ**

ತೃತೀಯ ಸಂಸ್ಕರಣ: ೧೯೬೮
(೨೫೦೦ ಪ್ರತಿಗಳು)

ಪರಿಷ್ಕೃತ ಕನ್ನಡ ಸಂಸ್ಕರಣ:
ರಾ. ಅ. ಕಶ್ಯಪ್, ಎಂ. ಎ.

ಮುದ್ರಕರು:
**ಸಾಧನಾ ಮುದ್ರಣಾಲಯ,**
೬೬/೧, ೫ನೇ ಮೇಯಿನ್ ರಸ್ತೆ,
ಗಾಂಧಿನಗರ, ಬೆಂಗಳೂರು–೯,

# ಎರಡು ಮಾತು

೧೧-೫-೧೯೫೧ ರಲ್ಲಿ ಇತಿಹಾಸ ಪ್ರಸಿದ್ಧವಾದ ಸೋಮನಾಥ ಮಂದಿರದ ಪುನಃಪ್ರತಿಷ್ಠಾಪನಾ ಮಹೋತ್ಸವ ನಡೆಯಿತು. ಅದು ಭಾರತಕ್ಕೆ ವಿಶೇಷ ಗೌರವವನ್ನು ತಂದ ಒಂದು ಸಂದರ್ಭ.

ಸ್ವರ್ಗೀಯ ಸರದಾರ ಪಟೇಲರ ಒಂದು ಮಹತ್ಕಲ್ಪನೆಯು ಆ ದಿವಸ ಕಾರ್ಯರೂಪಕ್ಕೆ ಬಂತು. ರಾಷ್ಟ್ರದ ಗೌರವಕ್ಕೆ ಪಾತ್ರರಾದ ರಾಷ್ಟ್ರಪತಿ ಡಾ. ರಾಜೇಂದ್ರಪ್ರಸಾದರು ಈ ಸಮಾರಂಭದ ಪ್ರಮುಖ ಸ್ಥಾನವನ್ನು ಕೈಕೊಂಡಿದ್ದರು. ಮಾನನೀಯರಾದ ಶ್ರೀ ಕನ್ಹೈಯಾಲಾಲ ಮುನ್ಶಿಯವರು ಆ ಸಮಾರಂಭದ ಸೂತ್ರದಾರರಾಗಿದ್ದರು. ಸನ್ಮಾನ್ಯರಾದ ಶ್ರೀ ಯು. ಎನ್. ಢೇಬರವರು ಸ್ವಾಗತಾಧ್ಯಕ್ಷರಾಗಿದ್ದರು. ರಾಷ್ಟ್ರದ ಈ ವಿಭೂತಿ ಪುರುಷರು ಸೇರಿ ಅಂದು ಭಾರತೀಯ ಇತಿಹಾಸದ ಸುವರ್ಣಾಧ್ಯಾಯ ಒಂದನ್ನು ಒದಗಿಸಿದರು.

ಈ ಪವಿತ್ರ ಸಂದರ್ಭದಲ್ಲಿ ಅಲ್ಲಿ 'ಸಂಸ್ಕೃತ ವಿಶ್ವಪರಿಷತ್ತಿ'ನ ಸ್ಥಾಪನೆಯಾಯಿತು. ಪರಿಷತ್ತಿನ ನಾಲ್ಕನೆಯ ಅಧಿವೇಶನದಲ್ಲಿ, ಸಂಸ್ಕೃತದಲ್ಲಿ ಸರಳ ಪರೀಕ್ಷೆಗಳನ್ನು ಆರಂಭಿಸಬೇಕೆಂದು ತೀರ್ಮಾನವಾಯಿತು. ಅದಕ್ಕನುಗುಣವಾಗಿ ಒಂದು ಪಾಠ್ಯಕ್ರಮ ಸಮಿತಿಯು ರಚಿಸಲ್ಪಟ್ಟಿತು. ಅದರ ಸದಸ್ಯರು ಈ ರೀತಿ ಇದ್ದರು :

೧. ಶ್ರೀಯುತ ಜ. ಹ. ದವೆ, ಪ್ರಧಾನಮಂತ್ರಿ ಸಂ. ವಿ. ಪರಿಷತ್
೨. ಪ್ರಾ. ಹ. ದಾ. ವೇಲಣಕರರವರು
೩. ಡಾ|| ಎ. ಡಿ. ಪುಸಾಲಕರರವರು
೪. ಆಚಾರ್ಯ ವೆಂಕಟೇಶ ದೀಕ್ಷಿತರು
೫. ಪ್ರಾ. ಅನಂತಶಾಸ್ತ್ರಿ ಫಡಕೆಯವರು
೬. ಶ್ರೀ ಮಹೇಶಚಂದ್ರಶಾಸ್ತ್ರಿ, ಪರೀಕ್ಷಾಮಂತ್ರಿ.

ಸಮಿತಿಯ ಈ ಸದಸ್ಯರುಗಳು ಸೇರಿ ನಿರ್ಧರಿಸಿದ ಪಾಠಕ್ರಮಕ್ಕೆ ಅನುಗುಣವಾಗಿ ಈ ಪುಸ್ತಕಗಳು ಪ್ರಕಾಶಿತವಾಗುತ್ತಿವೆ.

ಈ ಪಠ್ಯಪುಸ್ತಕಗಳು ಜನಪ್ರಿಯವಾಗುವುವೆಂದು ನಮಗೆ ನಂಬಿಕೆಯಿದೆ. ಈ ಪಠ್ಯಪುಸ್ತಕಗಳ ಸಹಾಯದಿಂದ 'ಸಂಸ್ಕೃತ ವಿಶ್ವಪರಿಷತ್ತಿ'ಗೂ ಭಾರತೀಯ ವಿದ್ಯಾಭವನದ ಮೂಲಕ ನಡೆಸಲ್ಪಡುವ ಪರೀಕ್ಷೆಗಳಿಗೂ ಹೆಚ್ಚು ಪ್ರಸಾರವಾಗುವುದೆಂಬ ಭರವಸೆ ಇದೆ.

ಪಾಠ್ಯಕ್ರಮ ಸಮಿತಿಯ ಸದಸ್ಯರುಗಳಿಗೆ ನಾವು ಆಭಾರಿಯಾಗಿದ್ದೇವೆ. ಅವರು ಈ ಕಾರ್ಯದಲ್ಲಿ ಅಮೂಲ್ಯ ಸಹಕಾರ ನೀಡಿದ್ದಾರೆ.

ಜಯಂತಕೃಷ್ಣ ಹರಿಕೃಷ್ಣ ದವೆ,
ಪ್ರಧಾನಮಂತ್ರಿ, ಸಂ. ವಿ. ಪ.
೨೫-೪-೫೯. ಮತ್ತು ಮಾನಾರ್ಹ ನಿಯಾಮಕ, ಭಾ. ವಿ. ಭ.

# ಪ್ರಸ್ತಾವನೆ

"ಸರಳ ಸಂಸ್ಕೃತ ಶಿಕ್ಷಕ"ದ ಮೂರನೆಯ ಭಾಗವನ್ನು ಪ್ರಾರಂಭಿಸುವುದಕ್ಕೆ ಮೊದಲು ಒಂದು ಮತ್ತು ಎರಡನೆಯ ಭಾಗಗಳಲ್ಲಿ ಕಲಿತ ಅಂಶಗಳನ್ನು ವಿದ್ಯಾರ್ಥಿಗಳು ತಮ್ಮದಾಗಿ ಮಾಡಿಕೊಳ್ಳಬೇಕು. ಇದಕ್ಕಾಗಿ ಅವರು ಓದಬೇಕು, ಓದಿದ್ದನ್ನು ಮತ್ತೆ ಮತ್ತೆ ನೆನಪಿಗೆ ತಂದುಕೊಳ್ಳಬೇಕು; ಅಲ್ಲದೆ ಕಲಿತ ಅಂಶಗಳನ್ನು ವ್ಯವಹಾರದಲ್ಲಿ ಉಪಯೋಗಿಸಬೇಕು. ಉದಾ:— ಹಿಂದಿನ ಭಾಗದಲ್ಲಿರುವ ಸಂವಾದಗಳ ಅನುಕರಣೆಯನ್ನು ಮಾಡಿ ತಾವೇ ಸ್ವಂತವಾಗಿ ಇನ್ನೂ ಹಲವು ಸಂವಾದಗಳನ್ನು ರಚಿಸುವ ಪ್ರಯತ್ನವನ್ನು ಮಾಡಬೇಕು. ಇತರೇ ವಿದ್ಯಾರ್ಥಿಗಳೊಂದಿಗೆ ಸಂಭಾಷಣೆಯನ್ನು ಮಾಡುವ ಪ್ರಯತ್ನವನ್ನೂ ಮಾಡಬೇಕು.

ಈ ಭಾಗದಲ್ಲಿ ಅನುವಾದ ಅಭ್ಯಾಸಗಳ ಜೊತೆಗೆ ವಾಕ್ಯರಚನೆ ಮುಂತಾದ ಪ್ರಶ್ನೆಗಳನ್ನು ಒಳಗೊಂಡ ಅಭ್ಯಾಸಗಳನ್ನು ಸೇರಿಸಲಾಗಿದೆ. ಈ ಅಭ್ಯಾಸಗಳ ಉದ್ದೇಶವೆಂದರೆ ವಿದ್ಯಾರ್ಥಿಯು ಸಂಸ್ಕೃತ ವಾಕ್ಯಗಳನ್ನು ಸ್ವತಂತ್ರ ರಚಿಸುವುದಕ್ಕೂ ಮತ್ತು ರಚಿತವಾದುದನ್ನು ಅನ್ವಯ ಪೂರ್ವಕವಾಗಿ ಅರ್ಥಮಾಡಿಕೊಳ್ಳಲೂ ಸಮರ್ಥನಾಗಲೆಂಬುದೇ ಆಗಿದೆ.

# सरल संस्कृत शिक्षकः

[ तृतीयः भागः ]

## पाठ १

### उद्यानम्

इदमुद्यानम् । उद्याने बालकाः क्रीडन्ति । बालकाः अत्र स्थित्वाल्पाहारमपि कुर्वन्ति । मनोहरं खलूद्यानमिदम् । अस्मिन् उद्याने वृक्षाः लताः च सन्ति । वृक्षेषु लतासु च स्थित्वा नानाविधाः विहगाः कोलाहलं कुर्वन्ति (कूजन्ति) । पश्य, तत्र काकाः, कुक्कुटाः, चटकाः च किमपि धान्यादिकं भक्षयन्ति । अत्र शुकः तिष्ठति । शुकस्य मधुरं रवं आकर्ण्य जनाः तं स्वगृहे पालयन्ति । तं च पञ्जराभ्यन्तरे स्थापयन्ति । पञ्जरस्थः शुकः मानुषसदृशीं वाचं वदति । एषः मयूरः । यदा वर्षायां घनाः गर्जन्ति तदा एषः नृत्यति । किं त्वया मयूरस्य नर्तनं दृष्टम् ?

कपोत-कोकिल-बक-हंस-कादम्बाः अस्मिन् उद्याने सर्वदैव श्रुतिमधुरं कूजन्ति । विशालं खलु उद्यानम् । अत्रैको विशालः तडागः अप्यस्ति । अस्मिन् जलाशये विविधाः जलचराः इतस्ततः सञ्चरन्ति । एकतः मकराः कच्छपाः, मण्डूकाः च दृश्यन्ते ।

उद्यानस्यापरे विभागे अनेक पशवः सन्ति । सिंहव्याघ्र-चित्रक-वृक-शृगाल-शम्भर-भल्ल-शूकर प्रभृतयः स्वे स्वे पञ्जरे तिष्ठन्ति । हरिणशश वानराणां स्थानं पृथगस्ति ।

अपरं चात्र यद्वयं पश्यामः तदस्ति पुष्पाणां सौन्दर्यम् । पुष्पेषु श्वेतपीतरक्तादिवर्णानां वैचित्र्यमस्ति । सेवान्तिका-जपा-यूथिका-पुष्पाणामत्राधिक्यं वर्तते । पाटलास्तु न बहवः । चम्पक-कर्णिकारमुद्गराः तु सर्वदा प्रफुल्लिताः सन्ति । इत्थं आसमन्तात्सर्वथा नयनमनोहरमिदमुद्यानम् ।

शब्दाः = ಶಬ್ದಗಳು

| | |
|---|---|
| १. काकः = ಕಾಗೆ | ११. सिंहः = ಸಿಂಹ |
| २. शुकः = ಗಿಳಿ | १२. व्याघ्रः = ಹುಲಿ |
| ३. कपोतः = ಪಾರಿವಾಳ | १३. चित्रक. = ಚಿರತೆ |
| ४. कोकिलः = ಕೋಗಿಲೆ | १४. वृकः = ತೋಳ |
| ५. बकः = ಬಕಪಕ್ಷಿ | १५. शृगालः = ನರಿ |
| ६. कादम्बः = ಬಾತು | १६. शम्बरः = ಸಾರಂಗ |
| ७. मत्स्यः = ಮೀನು | १७. भल्लः = ಕರಡಿ |
| ८. मकरः = ಮೊಸಳೆ | १८. शूकरः = ಹಂದಿ |
| ९. कच्छपः, कूर्मः = ಆಮೆ | १९. हरिणाः, मृगः = ಜಿಂಕೆ |
| १०. मण्डूकः = ಕಪ್ಪೆ | २०. शशः = ಮೊಲ |

## ಅಭ್ಯಾಸ ೧

१. उद्याने के के विहगाः सन्ति? तेषां नामानि लिखत ।

२. जलाशये ........, ........, ........, दृश्यन्ते ।
अस्मिन् उद्याने ..... ..... ..... ..... ..... सर्वदा ।
श्रुतिमधुरं कूजन्ति ॥
..... ..... ..... किमपि धान्यादिकं भक्षयन्ति ॥

ಮೇಲೆ ಬಿಟ್ಟಿರುವ ಸ್ಥಳಗಳಲ್ಲಿ ಯೋಗ್ಯವಾದ ಪದಗಳನ್ನು ಜೋಡಿಸಿರಿ.

३. जनाः शुकम् कस्मात् कारणात् पालयन्ति ॥

४. उद्याने कानि कानि पुष्पाणि सन्ति? तेषु सर्वदा प्रफुल्लितानि पुष्पाणि कानि?

## ಅಭ್ಯಾಸ ೨

ಸಂಸ್ಕೃತ ಭಾಷೆಗೆ ಅನುವಾದ ಮಾಡಿರಿ:—

೧. ಅಲ್ಲಿ ಒಂದು ಕಾಡು ಇದೆ. ೨. ಅದು ಬಹಳ ದೊಡ್ಡದಾಗಿದೆ. ೩. ಕಾಡಿನ ರಾಜ ಸಿಂಹ. ೪. ಆದ್ದರಿಂದ ಅದನ್ನು ವನರಾಜನೆನ್ನು ತ್ತಾರೆ. ೫. ಸಿಂಹವು ಮಾಂಸವನ್ನು ತಿನ್ನುತ್ತದೆ. ೬. ಅದು ನಾಲಿಗೆ ಯಿಂದ ನೀರನ್ನು ಕುಡಿಯುತ್ತದೆ. ೭. ಕಾಡಿನಲ್ಲಿ ಚಿರತೆ, ತೋಳ ಮತ್ತು ಕರಡಿಗಳು ಇರುತ್ತವೆ. ೮. ಆನೆಯ ಮೇಲೆ ರಾಜನು ಕುಳಿತು ಕೊಳ್ಳುತ್ತಾನೆ. ೯. ಆನೆಯು ಮಾಂಸವನ್ನು ತಿನ್ನುವುದಿಲ್ಲ. ೧೦. ಆನೆಯು ನಿಧಾನವಾಗಿ ನಡೆಯುತ್ತದೆ. ೧೧. ಆದರೆ ಕುದುರೆಯು ವೇಗ ವಾಗಿ ಓಡುತ್ತದೆ. ೧೨. ಸೈನಿಕರು ಕುದುರೆಗಳ ಮೇಲೆ ಕುಳಿತುಕೊಳ್ಳು ತ್ತಾರೆ. ೧೩. ಕುದುರೆಗಳ ಮೇಲೆ ಕುಳಿತುಕೊಂಡು ಅವರು ಯುದ್ಧ

ಮಾಡುತ್ತಾರೆ. ೧೪. ಒಂಟೆಗಳ ಮೇಲೆ ಕುಳಿತುಕೊಂಡು ಅವರು ಯುದ್ಧ ಮಾಡುವುದಿಲ್ಲ. ೧೫. ಒಂಟೆಗಳು ಮರುಭೂಮಿಯಲ್ಲಿ ನಡೆಯುತ್ತವೆ. ೧೬. ಅವು ಹೆಚ್ಚಾಗಿ ನೀರು ಕುಡಿಯುತ್ತವೆ. ೧೭. ಜಿಂಕೆಯು ಬಹಳ ಸುಂದರವಾದ ಪ್ರಾಣಿ. ೧೮. ಇದು ಆಶ್ರಮದಲ್ಲಿ ಇರುತ್ತದೆ. ೧೯. ಋಷಿಗಳು ಇದಕ್ಕೆ ಆಹಾರವನ್ನು ತಿನ್ನಿಸುತ್ತಾರೆ. ೨೦. ಶಕುಂತಲೆಯು ಜಿಂಕೆಯನ್ನು ಸಾಕುತ್ತಿದ್ದಳು.

### इदम् = ಇವನು ( ಪುಲ್ಲಿಂಗದ ರೂಪಗಳು )

| | | |
|---|---|---|
| अयम् | इमे | प्रथम |
| इमम्, एनम् | इमान्, एनान् | द्वितीया |
| अनेन, एनेन | एभिः | तृतीया |
| अस्मै | एभ्यः | चतुर्थी |
| अस्मात् | एभ्यः | पञ्चमी |
| अस्य | एषाम् | षष्ठी |
| अस्मिन् | एषु | सप्तमी |

### इदम् = ಇವಳು ( ಸ್ತ್ರೀಲಿಂಗದ ರೂಪಗಳು )

| | | |
|---|---|---|
| इयम् | इमाः | प्रथमा |
| इयम्, एनाम् | इमाः एनाः | द्वितीया |
| अनया, एनया | आभिः | तृतीया |
| अस्यै | आभ्यः | चतुर्थी |
| अस्याः | आभ्यः | पञ्चमी |
| अस्याः | आसाम् | षष्ठी |
| अस्याम् | आसु | सप्तमी |

## इदम् = ಇದು
(ನಪುಂಸಕಲಿಂಗ ರೂಪಗಳು)

| | | |
|---|---|---|
| इदम् | इमानि | प्रथमा |
| इदम् | इमानि | द्वितीया |

ಉಳಿದ ರೂಪಗಳು ಪುಲ್ಲಿಂಗದಂತೆಯೇ ನಡೆಯುತ್ತವೆ.

## ಅಭ್ಯಾಸ ೩

ಕನ್ನಡಕ್ಕೆ ಅನುವಾದ ಮಾಡಿರಿ:—

१. आश्रम मृगः अयम् न हन्तव्यः ।
२. इदम् आश्रम द्वारम् ।
३. इमाम् छायाम् अश्रयामि ।
४. एषः खलु कुलपतेः कण्वस्य आश्रमः दृश्यते ।
५. इयम् च ते शरीरावस्था ।
६. सिंह-व्याघ्र-चित्रकादयः क्रूरजन्तवः ।
७. एभ्यः भयम् भवति ।
८. अस्मात् कारणात् ते पञ्जरेषु स्थाप्यन्ते ।
९. कूर्मः अङ्गानि संहरते ।
१०. वृकः कुक्कुटान् हनिष्यति ।



# पाठ—२

## संवाद

सुरेशः—अशोक, क्व गच्छसीदानीम् ?

अशोकः—आपणं गच्छामि। विलम्बः सञ्जातः। सत्वरमेव कानिचित् पण्यानि क्रीत्वा निवर्तयिष्यामि।

सुरेशः—किं कश्चिदुत्सवः अद्य तव गेहे ?

अशोकः—आम्। अद्य पितृपादानाम् जन्मदिनोत्सवः।

सुरेशः—किं वयः तव पितृचरणानाम् ?

अशोकः—पञ्चषष्ठिसमायुतं मम पितुर्वयः। अद्य मम गृहे बहवः सम्बन्धिनः मित्राणि च आगमिष्यन्ति। त्वयापि आगन्तव्यम्।

सुरेशः—भद्र, कतिवादने आगमिष्यन्ति जनाः ?

अशोकः—समयं किं पृच्छसि ? षड्वादनं यावत् आगच्छ।

सुरेशः—सार्धषड्वादनं यावत् आगच्छामि चेत् ?

अशोकः—नैव, षड्वादनसमये एव निश्चितरूपेणागन्तव्यं त्वया।

सुरेशः—अस्तु, तर्हि गच्छ त्वं, नोचेत् विलम्बः भविष्यति ?

अशोकः—(विपण्यां प्रविशति, वणिजपमुसृत्य वदति च) अयि वणिग्वर, कानिचित् पण्यानि क्रेतुमागतः अहम्! देहि शीघ्रं मह्यम्।

वणिक्— वत्स, त्वं किं किं क्रेतुमिच्छसि ? मम विपणौ बहूनि उत्तमोत्तमानि पण्यानि सन्ति तानि च स्वल्पमूल्यानि सन्ति । वद, कियत् परिमाणं किं क्रेतुमिच्छसि ?

अशोकः—सेरभारा शर्करा कियता मूल्येन विक्रीयते ?

वणिक्—नाधिकं मूल्यं, केवलमष्टाणकेन दास्यामि सेरभारां शर्कराम् ।

अशोकः—तर्हि तोलयित्वा शीघ्रं सेरपरिमितां शर्करां देहि ।

वणिक्—( शर्करां कर्गले संपुटीकृत्य ) बाल, गृहाण शर्करां । देहि च मह्यमाणकाष्टकं सत्वरम् ।

अशोकः—( आदाय हस्ते तस्य भारं चाल्पं विलोक्य ) भोः वणिक्, नैषा सेरभारा शर्करा दृश्यते । पुनः सम्यक् तोलयित्वा देहि ।

वणिक्—( सहासम् ) किमनेन । अकिञ्चित्करमेतत् । तव भारवहनक्लेशः अल्पः भविष्यति ।

अशोकः—( मनसि किंचिद् विचार्याणकचतुष्टयं च तस्य पुरतः उपस्थाप्य ) भोः श्रेष्ठिन् गृहाण मूल्यं, मया हि गृहं शीघ्रं गन्तव्यम् । ( इत्युक्त्वा ततः चटुलया गत्या प्रस्थितः ) ।

वणिक्—रे बालक, एहि एहि, शृणु तावत् ; अल्पमेवमूल्यं दत्वा क्व व्रजसि ? आणकचतुष्टयमन्यदपि देहि ।

अशोकः—श्रेष्टिन् किमनेन; अकिञ्चित्करमेतत्। नाणक-
गणनाक्लेशः ते अल्पीयान् भविष्यति।

(इत्युक्त्वा ततः जवेन पलायितः)

(विपणीस्थः वञ्चकः वणिक् न किमपि कर्तुमशक्नोत्। केवलं तस्य मनसि पश्चात्तापः एव आसीत्)।

अशोकः गृहमागत्य सर्वमपि इतिवृत्तमकथयत्। तत्रस्था सर्वे अपि बान्धवाः मित्राणि च परमानन्दं प्रापुः। इत्थं जन्मोत्सवः सानन्दं समाप्तिं यातः।

शब्दाः = ಶಬ್ದಗಳು

१. कानिचित् = ಕೆಲವು
२. पण्यानि = ಮಾರುವ ವಸ್ತುಗಳು
३. पञ्चषष्ठि = ಅರವತ್ತೈದು
४. समाः = ವರ್ಷ
५. विपणिः = ಅಂಗಡಿ ಬೀದಿ
६. प्रविशति = ಪ್ರವೇಶಿಸುತ್ತಾನೆ
७. उपसृत्य = ಸಮೀಪಿಸಿ
८. स्वल्पमूल्यानि = ಸ್ವಲ್ಪ ಬೆಲೆಬಾಳುವ
९. कियत् = ಎಷ್ಟು
१०. परिमाणम् = ಅಳತೆ, (ತೂಕ)
११. सेरभारा = ಒಂದು ಸೇರು ತೂಕ
१२. शर्करा = ಸಕ್ಕರೆ
१३. कर्गलम् = ಕಾಗದ
१४. संपुटीकृत्य = ಪೊಟ್ಟಣಕಟ್ಟಿ
१५. आणकः = ಆಣೆ
१६. आदाय = ತೆಗೆದುಕೊಂಡು
१७. विलोक्य = ನೋಡಿ
१८. अकिञ्चित्करम् = ಅತ್ಯಲ್ಪವಾದ ವಿಷಯ
१९. अल्पीयान् = ಸ್ವಲ್ಪ
२०. जवेन = ವೇಗದಿಂದ
२१. रूप्यः, रूप्यकः = ರೂಪಾಯಿ

## ಅಭ್ಯಾಸ ೪

ಸಂಸ್ಕೃತ ಭಾಷೆಗೆ ಅನುವಾದ ಮಾಡಿರಿ :—

೧. ಹಣ್ಣುಗಳ ಅಂಗಡಿ ಎಲ್ಲಿ ಇದೆ? ೨. ಇಲ್ಲಿ ಹಣ್ಣುಗಳ ಅಂಗಡಿ ಇಲ್ಲ. ೩. ಈ ಅಂಗಡಿ ಬೀದಿಯಲ್ಲಿ ಏನೇನು ಪದಾರ್ಥಗಳು ದೊರೆಯುತ್ತವೆ? ೪. ಇಲ್ಲಿ ಬೆಲ್ಲ, ತುಪ್ಪ, ಸಕ್ಕರೆ, ಧಾನ್ಯ ಮುಂತಾದವುಗಳು ಸಿಗುತ್ತವೆ. ೫. ಆ ಅಂಗಡಿಯಲ್ಲಿ ಏನು ಮಾರಲ್ಪಡುತ್ತದೆ? ೬. ಅಲ್ಲಿ ಬಟ್ಟೆಗಳು ಮಾರಲ್ಪಡುತ್ತವೆ. ೭. ಆ ಅಂಗಡಿಯವನು ಏನನ್ನು ಮಾರುತ್ತಾನೆ? ೮. ಅವನಾದರೋ ತುಪ್ಪವನ್ನು ಮಾರುತ್ತಾನೆ. ೯. ನನಗೆ ಸ್ವಲ್ಪ ತುಪ್ಪ ಬೇಕಾಗಿದೆ. ೧೦. ನಿನಗೆ ಎಷ್ಟು ತುಪ್ಪ ಬೇಕು? ೧೧. ನನಗೆ ಕೇವಲ ಒಂದು ಸೇರು ತುಪ್ಪ ಬೇಕಾಗಿದೆ. ೧೨. ಇದಕ್ಕಾಗಿ ಐದು ರೂಪಾಯಿ ಕೊಡಬೇಕಾಗುವುದು. ೧೩. ತುಪ್ಪವನ್ನು ತೆಗೆದುಕೊಂಡು ನೀನು ಏನು ಮಾಡುವೆ? ೧೪. ಊಟದೊಡನೆ ನಾನು ತಿನ್ನಲು ಬಯಸುತ್ತೇನೆ. ೧೫. ತುಪ್ಪವನ್ನು ತೆಗೆದುಕೊಂಡು ನಾನು ಬೇಗ ಮನೆಗೆ ಹೋಗಬೇಕಾಗಿದೆ.

## ಅಭ್ಯಾಸ ೫

೧. ಬಿಟ್ಟಿರುವ ಸ್ಥಳಗಳಲ್ಲಿ ಸರಿಯಾದ ಪದಗಳನ್ನು ಸೇರಿಸಿ :—

(अ) अशोकः सेरभारां शर्करां ………… विपणिम् आगच्छत् ।

(आ) अशोकः गृहम् आगत्य ………… अकथयत् । तत् श्रवणेन सर्वे ………… प्रापुः ।

(इ) मम पितृपादानां वयः ………… ।

(ई) केवलम् अष्टाणकेन ………… शर्करां दास्यामि ।

೨. ಜನ್ಮದಿನೋತ್ಸವವು ಹೇಗೆ ಸಂತೋಷಪ್ರದವಾಯಿತೆಂದು ಹಲವು ಸಂಸ್ಕೃತ ವಾಕ್ಯಗಳಲ್ಲಿ ಹೇಳಿರಿ.

# पाठ ३

## क्रियापदानि

### ಆಜ್ಞಾರ್ಥದ ರೂಪಗಳು

ಸರಳ ಸಂಸ್ಕೃತ ಶಿಕ್ಷಕದ ೨ನೆಯ ಭಾಗದಲ್ಲಿ (೨೦ನೇ ಪುಟದಲ್ಲಿ) ಈಗಾಗಲೇ ಆಜ್ಞಾರ್ಥದ ಕ್ರಿಯಾ ರೂಪಗಳಲ್ಲಿ ಮಧ್ಯಮ ಪುರುಷ ಏಕವಚನದ ರೂಪಗಳನ್ನು ವಿದ್ಯಾರ್ಥಿಗಳು ಕಲಿತಿರುತ್ತಾರೆ. ಸಂಸ್ಕೃತ ವ್ಯಾಕರಣ ಶಾಸ್ತ್ರದಲ್ಲಿ लोट् लकार ವೆಂಬ ಪಾರಿಭಾಷಿಕ ಪದವನ್ನು ಆಜ್ಞೆ ಮುಂತಾದ ಅರ್ಥದಲ್ಲಿ ಬಳಸುವ ಧಾತುರೂಪಗಳಿಗೆ ಕೊಟ್ಟಿರುತ್ತಾರೆ. ಆಜ್ಞಾರ್ಥವು ಕೇವಲ ಮಧ್ಯಮಪುರುಷವೊಂದಕ್ಕೆ ಹೊಂದುವುದಾದರೂ लोट् लकार ದ ರೂಪಗಳು.

(೧) ಆಜ್ಞೆ, (೨) ಸತ್ಕಾರ, (೩) ಪ್ರಶ್ನೆ, (೪) ಪ್ರಾರ್ಥನೆ (೫) ಆಶೀರ್ವಾದಗಳನ್ನು ಪ್ರಕಟಿಸಲು ಉಪಯೋಗಿಸಲ್ಪಡುವುದಾದ್ದರಿಂದ ಎಲ್ಲಾ ಪುರುಷದಲ್ಲೂ ರೂಪಗಳಿರುತ್ತವೆ.

भू = ಇರು

| एकवचन | द्विवचन | बहुवचन | |
|---|---|---|---|
| भवतु, भवतात् | भवतां | भवन्तु | प्र. पु, |
| भव, भवतात् | भवतं | भवत | म. पु. |
| भवानि | भवाव | भवाम | उ. पु. |

ಈ ರೂಪಗಳಂತೆಯೇ ಉಳಿದ ಧಾತುಗಳ ರೂಪಗಳನ್ನು ಸಿದ್ಧಗೊಳಿಸಬೇಕು.

## ಹಲವು ಉದಾಹರಣೆಗಳು

सः पठतु = ಅವನು ಓದಲಿ. त्वं पठ = ನೀನು ಓದು.

अहं पठानि = ನಾನು ಓದಲೇ?

## श्लोकः

निन्दन्तु नीतिनिपुणाः अथवा स्तुवन्तु,
लक्ष्मीः समाविशतु गच्छतु वा यथेष्टं ॥
अद्यैव वा मरणम् अस्तु युगान्तरे वा,
न्याय्यात्पथः प्रविचलन्ति पदं न धीराः ॥

ನೀತಿಶಾಸ್ತ್ರ ತಿಳಿದವರು ನಿಂದೆಯನ್ನಾದರೂ ಮಾಡಲಿ, ಲಕ್ಷ್ಮಿಯು (ಧನವು) ಯಥೇಷ್ಟವಾಗಿ ಬಂದು ಸೇರಲಿ ಅಥವಾ ಹೊರಟು ಹೋಗಲಿ, ಇಂದೇ ಮರಣವುಂಟಾಗಲೀ ಅಥವಾ ಯುಗಾಂತರದಲ್ಲೇ ಆಗಲೀ, ನ್ಯಾಯವಾದ ಮಾರ್ಗದಿಂದ ಧೀರರು ಎಂದೆಂದಿಗೂ ಕದಲುವುದಿಲ್ಲ.

## ಆಜ್ಞಾರ್ಥದ ರೂಪಗಳು

पत् = ಬೀಳು

| एकवचन | बहुवचन | |
|---|---|---|
| पततु | पतन्तु | प्र. पु. |
| पत | पतत | म. पु. |
| पतानि | पताम | उ. पु. |

पठ् = ಓದು

| | | |
|---|---|---|
| पठतु | पठन्तु | प्र. पु. |
| पठ | पठत | म. पु. |
| पठानि | पठाम | उ. पु. |

वद् = ಮಾತಾಡು

| | | |
|---|---|---|
| वदतु | वदन्तु | प्र. पु. |
| वद | वदत | म. पु. |
| वदानि | वदाम | उ. पु. |

स्मृ ( स्मर् ) = ಸ್ಮರಿಸು

| | | |
|---|---|---|
| स्मरतु | स्मरन्तु | प्र. पु. |
| स्मर | स्मरत | म. पु. |
| स्मरानि | स्मराम | उ. पु. |

ಧಾತುಗಳು

१. रुह् = ಬೆಳೆ, ಮೊಳಕೆಯಾಗು [ रोहति, रोक्षयति, रोहतु ]
२. लुभ् = ಅತ್ಯಾಸೆ ಪಡು [ लुभ्यति, लोभिष्यति, लुभ्यतु ]
३. वम् = ವಾಂತಿಮಾಡು [ वमति, वमिष्यति, वमतु ]
४ व्रज् = ಹೋಗು [ व्रजति, व्रजिष्यति, व्रजतु ]
५. शंस् = ಹೊಗಳು [ शंसति, शंशिष्यति, शंसतु ]
६. श्लिष् = ಆಲಂಗಿಸು [ श्लिष्यति, श्लेक्ष्यति, श्लिष्यतु ]
७. सह् = ಸಹಿಸು [ सहते, सहिष्यते ]
८. हृ = ಹರಣಮಾಡು [ हरति, हरते ]
९. ध्वंस् = ನಾಶಮಾಡು [ ध्वंसते ]
१०. दध् = ಧಾರಣೆ ಮಾಡು [ दधते, दधिष्यते ]

ಧಾತುಗಳ ಪಕ್ಕದಲ್ಲಿ ಕೇವಲ ಪ್ರಥಮ ಪುರುಷ ಏಕವಚನ ರೂಪವನ್ನು ತೋರಿಸಲಾಗಿದೆ. ಉಳಿದ ರೂಪಗಳನ್ನು ಇವುಗಳ ಆಧಾರದ ಮೇಲೆ ಮಾಡಿಕೊಳ್ಳಬಹುದು.

## ಅಭ್ಯಾಸ ೬

ಕನ್ನಡಕ್ಕೆ ಅನುವಾದ ಮಾಡಿರಿ :—

अथ कदाचित् दण्डकारण्ये लंकेश्वरस्य भगिनी शूर्पणखा देवोपमं रामं विलोक्य तत्रागता। तं रामं दृष्ट्वा सा राक्षसी काममोहिता बभूव विवाहार्थं च न्यवेदयत्। रामः च तां सहासमब्रवीत्—'अहं विवहितः अस्मि। इयं मे भार्या सीता। अतः मम भ्रातरं भज।' एतत् श्रुत्वा रामं विसृज्य राक्षसी लक्ष्मणं प्राप्ता। आगतां तां लक्ष्मणः अवोचत्—'कथं दासस्य मे भार्या भूत्वा त्वं दासी भवितुमिच्छसि? परवशः अहम्। मम भ्राता रामः एव तव योग्यः भविष्याति गच्छ तं प्रति।' सा पुनः रामं गत्वावदत्—'तव भार्यां एव भक्षयिष्यामि। निःसपत्नी भूत्वा त्वया सह चरिष्यामि।' तत श्रुत्वा कुपितः रामः लक्ष्मणमब्रवीत्—'अनार्येषु कथञ्चन एवं परिहासः नैव कार्यः। अलं परिहासेन।'

## ಅಭ್ಯಾಸ ೭

ಸಂಸ್ಕೃತ ಭಾಷೆಗೆ ಪರಿವರ್ತಿಸಿರಿ :—

ಆಗ ಶೂರ್ಪಣಖಿಯು ರಾವಣನನ್ನು ಕುರಿತು ಪುನಃ ಹೇಳಿದಳು— "ಎಲೈ ದಶಕಂಧರನೇ, ರಾಮನ ಪತ್ನಿಯಾದ ಸೀತೆಯು ಬಹಳ ಸುಂದರವಾಗಿದ್ದಾಳೆ. ಅಂಥಾ ಹೆಂಗಸನ್ನು ನಾನು ಮೊದಲು ಎಲ್ಲಿಯೂ ನೋಡಿಲ್ಲ. ಸೀತೆಯು ಹೇಗಿರುವಳೋ ಹಾಗೆ ದೇವಿಯಾಗಲೀ, ಯಕ್ಷಿಣಿಯಾಗಲೀ, ಗಂಧರ್ವ-ಸ್ತ್ರೀಯಾಗಲೀ, ಕಿನ್ನರ-ಸ್ತ್ರೀಯಾಗಲೀ ಇಲ್ಲ. ಆದ್ದರಿಂದ

ಅವಳು ನಿನ್ನ ಹೆಂಡತಿಯಾಗಲು ಅರ್ಹಳು ಮತ್ತು ನೀನು ಅವಳಿಗೆ ಯೋಗ್ಯವಾದ ಪತಿಯಾಗಿರುವೆ." ಇದನ್ನು ಕೇಳಿ ರಾವಣನು ಮಾರೀಚನ ಆಶ್ರಮಕ್ಕೆ ಹೋದನು; ಮತ್ತು ಇಂತೆಂದನು—" ನೀನು ನನಗೆ ಸಹಾಯ ಮಾಡು. ನೀನು ಚಿನ್ನದ ಜಿಂಕೆಯಾಗಿ ಪಂಚವಟಿಗೆ ಹೋಗು. ನಿನ್ನನ್ನು ನೋಡಿ ರಾಮನು ನಿನ್ನ ಹಿಂದೆ ಓಡಿಬರುವನು. ಆಗ ನಾನು ಸೀತೆಯನ್ನು ಅಪಹರಿಸುವೆನು."

## शब्दाः = ಶಬ್ದಗಳು

१. कदाचित् = ಒಂದುವೇಳೆ
२. देवोपमम् = ದೇವಸಮಾನನಾದ
३. काममोहिता = ಕಾಮಪೀಡಿತಳಾದ
४. बभूव = ಆದಳು
५. भज = ಭಜಿಸು
६. परवशः = ಪರಾಧೀನ
७. निःसपत्नी ಸವತಿ ರಹಿತಳಾದ
८. अलम् = ಸಾಕು
९. पुरा = ಮೊದಲು
१०. बलात = ಬಲಾತ್ಕಾರದಿಂದ
११. अयुक्ताचारः = ದುರಾಚಾರವುಳ್ಳವನು
१२. परुषः = ಕಠಿಣ
१३. त्वरमाणः=ಆತುರಪಡುವವ
१४. कुलपांसनः = ಕುಲದೂಷಕ
१५. नाराचः = ಬಾಣ
१६. सन्निभः = ಸದೃಶವಾದ
१७. वन्यः = ವನದಲ್ಲಿರುವ
१८. कृताञ्जलि = ಕೈಮುಗಿದುಕೊಂಡು
१९. कथञ्चन = ಹೇಗಾದರೂ
२०. प्रतिजग्राह =ಸ್ವೀಕರಿಸಿದನು
२१. वरम् = ಶ್ರೇಷ್ಠ

# पाठ ४

## ಉಪಸರ್ಗ

ಧಾತು (ಕ್ರಿಯಾಪದ) ವಿನ ಹಿಂದೆ ಬಂದು ಅದರ ಅರ್ಥವನ್ನು ಬದಲಾವಣೆ ಮಾಡುವ ಅವ್ಯಯುಗಳಿಗೆ "ಉಪಸರ್ಗ" ಗಳೆಂದು ಹೆಸರು. ಈ ಉಪಸರ್ಗಗಳು ಅವುಗಳನ್ನು ಧಾತುವಿಗೆ ಸೇರಿಸಿದಾಗ ಆಗುವ ಅರ್ಥವನ್ನು ಕೆಳಗೆ ಕೊಡಲಾಗಿದೆ :—

१. प्र = ಆಧಿಕ್ಯ, ಉತ್ಕರ್ಷ
२. परा = ತಲೆಕೆಳಗು, ವಿರುದ್ಧ
३. अप = ದೂರ, ವಿಯೋಗ
४. सम् = ಒಂದಾಗುವುದು
५. अनु = ಅನುಕೂಲ, ಅನುಸಾರ
६. अव = ಕೆಳಗೆ
७. निस् = ಹೀನವಾದ
८. निर् = ಹೀನವಾದ
९. दुस् = ದುಷ್ಟ
१०. दुर् = ದುರ್ಗತಿ
११. वि = ವಿಶೇಷ, ವಿರೋಧ, ಭಿನ್ನ
१२. आ = ಈ ಕಡೆ
१३. नि = ಬರಿದು ಮಾಡು
१४. आंध = ಮೇಲೆ
१५. अपि = ಮುಂದೆ
२६. अति = ಅತಿಶಯ
१७. सु = ಉತ್ತಮ
१८. उद् = ಮೇಲೆ, ಎತ್ತರ
१९. अभि = ಮುಂದೆ
२०. प्रति = ತಲೆಕೆಳಕಾಗು
२१. परि = ಸುತ್ತಲೂ
२२. उप = ಸಮೀಪ, ಅಧಿಕ

ಉಪಸರ್ಗಗಳಿಗೆ ಸಂಬಂಧಿಸಿದ ಕೆಳಗಿನ ಶ್ಲೋಕವನ್ನು ಕಂಠಪಾಠ ಮಾಡಿರಿ :—

उपसर्गेण धात्वर्थो बलादन्यत्र नीयते ।
प्रहाराहारसंहारविहारपरिहारवत् ॥

ಅರ್ಥ :—ಉಪಸರ್ಗಗಳ ಸಂಬಂಧದಿಂದ ಧಾತುಗಳ ಅರ್ಥವು ಖಂಡಿತವಾಗಿಯೂ ಬದಲಾವಣೆ ಹೊಂದುವುದು.

ಉದಾ :—हृ ಎಂಬ ಧಾತುವಿನ ಹಿಂದೆ प्र ಎಂಬ ಉಪಸರ್ಗವು ಸೇರಿ प्रहार ಎಂಬ ರೂಪವಾದಾಗ हृ=ಹರಣಮಾಡು ಎಂಬರ್ಥವು ಹೋಗಿ प्रहार = ಹೊಡೆ, ಎಂಬರ್ಥವಾಗುವುದು. आहार = ಭೋಜನ, सं+हार=ಕೊಲ್ಲು, ವಿನಾಶಮಾಡು, वि+हार= ಕ್ರೀಡಿಸು, परि + हार = ನಿವಾರಿಸು.

ಈ ರೀತಿ ಮೂಲಧಾತುವಿನ ಅರ್ಥ ಬದಲಾವಣೆ ಹೊಂದಿ ಬೇರೆ ಬೇರೆ ಅರ್ಥವಾಗುವುದು.

भू ಧಾತುವಿನೊಡನೆ ಬೇರೆ ಬೇರೆ ಉಪಸರ್ಗವನ್ನು ಸೇರಿಸಿದಾಗ ಅದರ ಅರ್ಥವು ಈ ರೀತಿ ಬದಲಾವಣೆ ಹೊಂದುವುದು.

भू = ಇರು. ಇದರ ವ್ಯಕ್ತಸ್ವರೂಪಗಳನ್ನು ನೋಡಿ :—

प्र + भू = ವೃದ್ಧಿಹೊಂದು. ( प्रभव = ಹುಟ್ಟು, प्रभाव = ಶಕ್ತಿ, प्रभु = ಒಡೆಯ ).

परा + भू = ಪರಾಭವಗೊಳಿಸು. ( पराभव = ಸೋಲು )

आप + भू = ದೂರವಿರು. ( अपभूति = ಪರಾಜಯ, ನಾಶ )

सम् + भू = ಒಂದಾಗು, ಜನ್ಮಗ್ರಹಣ ಮಾಡು. ( सम्भव = ಉತ್ಪತ್ತಿ, ಸಂಭೂತಿ, ಐಕ್ಯ )

अनु + भू = ಅನುಭವ ಮಾಡು.

वि + भू = ವೈಭವಯುಕ್ತನಾಗಿರು. ( विभव = ಧನ, ಐಶ್ವರ್ಯ )

अति + भू = ಎಲ್ಲಕ್ಕಿಂತ ಹೆಚ್ಚಾಗಿ ವೃದ್ಧಿಹೊಂದು. ( अति-भवनम् = ಎಲ್ಲಕ್ಕಿಂತ ದೊಡ್ಡದಾಗಿರುವುದು )

उद् + भू = ಉತ್ಪನ್ನವಾಗು. (उद्भव = ಉತ್ಪತ್ತಿ)
अभि + भू = ತಿರಸ್ಕರಿಸು. (अभिभव = ತಿರಸ್ಕಾರ)
परि + भू = ಪರಾಭವಗೊಳಿಸು. (परिभव = ಪರಾಭವ, ಅಪಮಾನ).

ಉಳಿದ ಉಪಸರ್ಗಗಳು ಸಾಮಾನ್ಯವಾಗಿ ಭೂ ಧಾತುವಿನೊಡನೆ ಸೇರುವುದಿಲ್ಲ. ಅವು ಬೇರೆ ಧಾತುಗಳೊಡನೆ ಸೇರಿ ಆಗುವ ರೂಪಗಳನ್ನು ಕೆಳಗೆ ಉದಹರಿಸಿದೆ :—

१. बालिका परमेश्वरं अभ्यर्चयति = ಹುಡುಗಿಯು ಈಶ್ವರನನ್ನು ಚೆನ್ನಾಗಿ ಪೂಜಿಸುತ್ತಾಳೆ.

२. अत्र स्थित्वा त्वं किमर्थं एवं आक्रोशसि ? = ನೀನು ಇಲ್ಲಿ ಕುಳಿತು ಏತಕ್ಕಾಗಿ ಈ ರೀತಿಯಾಗಿ ಕೂಗಿಕೊಳ್ಳುತ್ತಿದ್ದೀಯೆ ?

३. बालाः किमर्थं संक्रन्दन्ति तत्र = ಹುಡುಗಿಯರು ಏತಕ್ಕಾಗಿ ಅಲ್ಲಿ ಅಳುತ್ತಿದ್ದಾರೆ ?

४. छात्राः विद्यालयस्य क्रीडाङ्गणे संक्रीडन्ति = ವಿದ್ಯಾರ್ಥಿಗಳು ಪಾಠಶಾಲೆಯ ಆಟದ ಮೈದಾನದಲ್ಲಿ ಚೆನ್ನಾಗಿ ಆಡುತ್ತಿದ್ದಾರೆ.

५. राजा अमात्यविषये विचिकित्सते = ರಾಜನು ಮಂತ್ರಿಯ ವಿಷಯದಲ್ಲಿ ಸಂಶಯಪಡುತ್ತಾನೆ.

ಈ ರೀತಿ ಧಾತುಗಳ ಹಿಂದೆ ಉಪಸರ್ಗ ಸೇರಿ ಅವುಗಳ ಅರ್ಥ ಬದಲಾವಣೆಯಾಗುತ್ತದೆ.

## ಅಭ್ಯಾಸ ೮

ಕನ್ನಡಕ್ಕೆ ಅನುವಾದ ಮಾಡಿರಿ :—

वाल्मीकिः नाम मुनिः अस्मिन् आश्रमे अवसत् । रमणीयः खलु आश्रमप्रदेशस्यायं परिसरः । एकदा देवर्षिः नारद.

आत्रागच्छत् । आगतं नारदं वाल्मीकिः विनयेनापृच्छत्—' देवर्षे ! साम्प्रतं लोके को नु धर्मज्ञः, गुणैः भूषितः दृढव्रतः, सर्वभूतेषु च हितः ? अहं तं महापुरुषं ज्ञातुम् इच्छामि । परं मे कुतूहलम् । त्वं हि प्रश्नस्यास्योत्तरं दातुं समर्थः ।'

प्रीतः नारदः अब्रवीत्—कोसलदेशे अयोध्या नाम नगरी अस्ति । तत्र दशरथः नाम राजा आसीत् । तस्य रामः नाम प्रियः पुत्रः । सः एव जनानां हिते रतः शुचिः साधुः विचक्षणः सर्वगुणोपेतः च अस्ति ।

नारदस्य तत् वचनं श्रुत्वा सन्तुष्टः वाल्मीकिः तं देवर्षिमपूजयत् । वाल्मीकिना संपूजितः नारदः देवलोकमगच्छत् । गते नारदे प्राज्ञः वाल्मीकिः रामचरितं पद्यरूपेण अरचयत् । तदेतदेव रामायणमिति प्रसिद्धं काव्यम् ।

---

## पाठ ५

### शब्दाः = ಶಬ್ದಗಳು

१. अटवी = ಕಾಡು
२. कौमुदी = ಬೆಳದಿಂಗಳು
३. आढकी = ತೊಗರಿಬೇಳೆ
४. असिपुत्री = ಚೂರಿ
५. वाहिनी = ಸೇನೆ
६. अनीकिनी = ಸೇನೆ
७. कादम्बरी = ಹೆಂಡ
८. कामिनी = ಹೆಂಗಸು
९. नगरी = ಪಟ್ಟಣ
१०. कर्तरी = ಕತ್ತರಿ

११. काञ्ची = ಡಾಬು
१२. स्तम्भः = ಕಂಭ
१३. सम्भ्रमः = ಗಾಬರಿ
१४. सम्भावितः = ಗೌರವಿಸಲ್ಪಟ್ಟ
१५. सम्भारः = ಸಿದ್ಧತೆ
१६. विषण्णः = ವ್ಯಥೆಗೊಂಡ
१७. विविक्तः = ಏಕಾಂತ ಪ್ರದೇಶ
१८. राजपथः = ರಾಜಮಾರ್ಗ
१९ मोघः = ವ್ಯರ್ಥ
२०. मृगया = ಬೇಟೆ
२१. बाढम् = ಸರಿ (ಅವ್ಯಯ)
२२. प्रहृष्टः = ಸಂತೋಷಗೊಂಡ

## ಈ ಕಾರಾಂತ ಸ್ತ್ರೀಲಿಂಗ नदी ಶಬ್ದದ ರೂಪ

| एकवचन | बहुवचन | |
|---|---|---|
| नदी | नद्यः | प्रथमा |
| नदीम् | नदीः | द्वितीया |
| नद्या | नदीभिः | तृतीया |
| नद्यै | नदीभ्यः | चतुर्थी |
| नद्याः | नदीभ्यः | पञ्चमी |
| नद्याः | नदीनाम् | षष्ठी |
| नद्याम् | नदीषु | सप्तमी |
| नदि | नद्यः | सम्बोधनम् |

ಇದೇ ರೀತಿ ಇತರ ಈಕಾರಾಂತ ಸ್ತ್ರೀಲಿಂಗ ಶಬ್ದದ ರೂಪಗಳು ನಡೆಯುತ್ತವೆ.

## ಅಭ್ಯಾಸ ೬

ಕೆಳಗಿನ ವಾಕ್ಯಗಳನ್ನು ಸಂಸ್ಕೃತಕ್ಕೆ ಅನುವಾದ ಮಾಡಿರಿ:—

೧. ಈ ದಿನ ನಾನು ಪ್ರಸನ್ನನಾಗಿದ್ದೇನೆ. ೨. ಇಂದಾದರೋ

ಎಲ್ಲರೂ ಪ್ರಸನ್ನರಾಗಿದ್ದಾರೆ. ೩. ಏನು ನೀನು ಬೇಟೆಗಾಗಿ ಕಾಡಿಗೆ ಹೋಗುವೆಯಾ? ೪. ನನ್ನೊಡನೆ ಬೇಟೆಗೆ ಮತ್ತಾರು ಬರುವರು? ೫. ಆ ನಿರ್ಜನವಾದ ಕಾಡಿಗೆ ನಾವು ಹೋಗುವೆವು. ೬. ಬೆಳದಿಂಗಳಲ್ಲಿ ಮರದ ಮೇಲೆ ಕುಳಿತುಕೊಳ್ಳುವೆವು. ೭. ನೀನು ಬೇಟೆಗೆ ಸಿದ್ಧಗೊಳಿಸು ೮. ಅಲ್ಲಿಗೆ ಸೇನೆಯು ಹೋಗುವುದಿಲ್ಲ. ೯. ಈ ನಗರವು ಬಹಳ ದೊಡ್ಡದು. ೧೦. ನೀನು ಏಕೆ ಉದಾಸೀನನಾಗಿದ್ದೀ? ೧೧. ನದಿಯ ತೀರದಲ್ಲಿ ಯಾರು ಕುಳಿತಿದ್ದಾರೆ? ೧೨. ಈ ದಿವಸ ಬೆಳದಿಂಗಳಲ್ಲಿ ನಾವೂ ಕೂಡ ಅಲ್ಲಿ ಕುಳಿತುಕೊಳ್ಳುವೆವು. ೧೩. ಅವನು ಯಾರು ನದಿಯಲ್ಲಿ ಸ್ನಾನ ಮಾಡುವವನು? ೧೪. ಭಾರತದಲ್ಲಿ ಅನೇಕ ನದಿಗಳಿವೆ. ೧೫. ನದಿಗಳ ನೀರು ಸಿಹಿಯಾಗಿರುತ್ತದೆ.

## ಆಜ್ಞಾರ್ಥದ ರೂಪಗಳು

[ ಆತ್ಮನೇಪದಿ ]

ಹಿಂದಿನ ಪಾಠದಲ್ಲಿ ಪರಸ್ಮೈಪದಗಳ ಆಜ್ಞಾರ್ಥ ರೂಪಗಳನ್ನು ಕೊಟ್ಟಿರುತ್ತೇವೆ. ಆತ್ಮನೇ ಪದಗಳ ರೂಪಗಳು ಈ ರೀತಿಯಾಗುತ್ತವೆ.

## भाष्

| एकवचन | बहुवचन | |
|---|---|---|
| भाषतां | भाषन्ताम् | प्रथम पुरुष |
| भाषस्व | भाषध्वम् | मध्यम पुरुष |
| भाषै | भाषामहै | उत्तम पुरुष |

ಇದರಂತೆಯೇ ಉಳಿದ ಆತ್ಮನೇ ಪದಗಳ ರೂಪಗಳನ್ನು ಸಿದ್ಧಗೊಳಿಸಬಹುದು.

ಈ ಪುಸ್ತಕದಲ್ಲಿ ಬರುವ ಧಾತುಗಳ ಪಕ್ಕದಲ್ಲಿ ವಿದ್ಯಾರ್ಥಿಗಳು ಇದುವರೆವಿಗೂ ಕಲಿತಿರುವ ವರ್ತಮಾನ, ಭವಿಷ್ಯತ್, ಭೂತಕಾಲ ಮತ್ತು

ಆಜ್ಞಾರ್ಥದ ರೂಪಗಳ ಪ್ರಥಮಪುರುಷ ಏಕವಚನ ರೂಪಗಳನ್ನು ಮಾತ್ರ ಸೂಚಿಸಿರುತ್ತೇವೆ. ಅವುಗಳ ಆಧಾರದ ಮೇಲೆ ಉಳಿದ ರೂಪಗಳನ್ನು ಮಾಡಬಹುದು.

## ಕ್ರಿಯಾಪದಗಳು

### ಪರಸ್ಮೈಪದಿ

೧. इष् = ಇಚ್ಛಿಸು, ಬಯಸು

[ इच्छति, ऐच्छत्, एषिष्यति, इच्छतु ]

೨. प्रच्छ् = ಕೇಳು

[ पृच्छति, अपृच्छत्, प्रक्ष्यति, पृच्छतु ]

೩. विश् = ಪ್ರವೇಶಿಸು

[ विशति, अविशत्, वेक्ष्यति, विशतु ]

೪. स्पृश् = ಮುಟ್ಟು

[ स्पृशति, अस्पृशत, स्प्रक्ष्यति, ಅಥವಾ स्पर्क्ष्यति, स्पृशतु ]

೫. सृज् = ಸೃಷ್ಟಿಮಾಡು

[ सृजति, असृजत्, स्रक्ष्यति, सृजतु ]

### ಆತ್ಮನೇಪದಿಗಳು

೬. लज्ज् = ನಾಚಿಕೆಪಡು

[ लज्जते, अलज्जत, लज्जिष्यते, लज्जताम् ]

೭. आदृ = ಆದರಿಸು

[ आद्रियते, आद्रियत, आदरिष्यते, आद्रियताम् ]

೮. धृ = ಧಾರಣೆ ಮಾಡು

[ ध्रियते, अध्रियत, धरिष्यते, ध्रियताम ]

## ಉಭಯಪದಿ

कृष् ( कृषति, कृषते ) = ಉಳು, क्षिप् ( क्षिपति, क्षिपते ) = ಎಸೆ. तुद् ( तुदति, तुदते ) = ಪೀಡಿಸು. मुच् ( मुञ्चति, मुञ्चते ) = ಬಿಡು. दिश् ( दिशति, दिशते ) = ತೋರಿಸು, ಹೇಳು. नुद् ( नुदति, नुदते ) = ಪ್ರೇರಿಸು. मिल् ( मिलति, मिलते ) = ಸೇರು. लिप् ( लिम्पति, लिम्पते ) = ಲೇಪಿಸು, ಹೊಂದು. सिच् ( सिञ्चति, सिञ्चते ) = ಎರಚು.

## ಅಭ್ಯಾಸ ೧೦

ಕೆಳಗಿನ ವಾಕ್ಯಗಳನ್ನು ಕನ್ನಡ ಭಾಷೆಗೆ ಅನುವಾದ ಮಾಡಿರಿ :—

१. अहं धनमिच्छामि । २. किं त्वम् आणकचतुष्टयं इच्छसि ? ३. सः पाषाणं क्षिपति । ४. किमर्थं त्वं तुदसेः । ५. सः स्तेनं पाशात् मुञ्चति । ६. शिक्षकः बालकं प्रश्नं पृच्छति । ७. अहं त्वां कुशलं पृच्छामि । ८. उष्णं जलं स्पृशामि । ९. ईश्वरः विश्वं सृजति । १०. त्वं कस्मात् लज्जसे ? ११. रामः आम्रवृक्षं जलेन सिञ्चति । १२. वयं साफल्यं विन्दामः । १३. सः चन्दनेन ललाटं लिम्पते । १४. लता वृक्षेण मिलति । १५. त्वं सायंकाले कुत्र मिलिष्यसि । १६. कृषकाः भूमिं कृषन्ति । १७. प्रथमं ग्रामस्य प्रधानः भूमिं कृषते, पश्चात् अन्ये कृषीवलाः कृषन्ते । १८. मेघाः आकाशात् जलं मुञ्चन्ति । १९. अहं धेनुं वने चारयितुं गोष्ठात् मुञ्चामि । २०. प्रह्लादः ध्यानेन परमं सुखं अविन्दत् । २१. विद्यया जनाः अमृतं विन्दन्ते । २२. सः उपवने पादपान् जलेन सिञ्चति ।

# पाठ ६

## ಅಭ್ಯಾಸ ೧೧

ಕನ್ನಡಕ್ಕೆ ಅನುವಾದ ಮಾಡಿರಿ :—

एतत् कस्य गृहं वर्तते ? अस्मिन् गेहे के निवसन्ति ? अस्य गृहस्याधिपतिः किं व्यवसायं करोति ? किं रामकृष्णः गृहस्यास्य स्वामी ? नहि रामकृष्णस्य गृहं अपरमस्ति । एतत्तु सदाशिवस्य गृहमस्ति । सदाशिवमहाशयः आंग्ल महाविद्यालये प्राध्यापकः अस्ति । सः तत्र साहित्य विषयमध्यापयति । छात्राणामुपरि तस्य पितृवत् स्नेहः वर्तते । सः न कदापि छात्रेभ्यः क्रुध्यति । सः सदैव छात्रेभ्यः उपादिशति यत् छात्रावास्थायां एकाग्रचित्तेनाध्ययनं कर्तव्यम् निद्रायां कलहेन वा समयः न यापनीयः ।

तेन पठितः येषः श्लोकः —

काव्याशास्त्रविनोदेन कालोगच्छति धीमताम् ।
व्यसनेन च मूर्खाणां निद्रया कलहेन वा ॥

ಟಿಪ್ಪಣಿ :— छात्रेभ्यः सः क्रुध्यति ಎಂಬುವಲ್ಲಿ छात्रेभ्यः ಎಂಬುದು चतुर्थी ವಿಭಕ್ತಿಯು. ಕ್ರೋಧ, ದ್ರೋಹ, ಈರ್ಷ್ಯ ಮತ್ತು ಅಸೂಯೆಯನ್ನು ತೋರಿಸುವ ಧಾತುಗಳು ಉಪಯೋಗಿಸಿದ ಕಡೆ ಚತುರ್ಥೀ ಉಪಯೋಗಿಸಲ್ಪಡುತ್ತದೆ.

## शब्दाः = ಶಬ್ದಗಳು

१. अङ्गुलीयकम् = ಉಂಗುರ
२. कलेवरम् = ಶರೀರ
३. कटिः, श्रोणिः = ಸೊಂಟ
४. जठरम्, उदरम् = ಹೊಟ್ಟೆ
५. उरः, वक्षः = ಎದೆ
६. स्कन्धः = ಹೆಗಲು
७. पाणिः = ಕೈ
८. अङ्गुष्ठः = ಹೆಬ್ಬೆರಳು
९. पुनर्भवः, नखः = ಉಗುರು
१०. वितस्तिः = ಹನ್ನೆರಡಂಗುಲ
११. प्रहस्तः, चपेटा = ನೀಡಿದ ಬೆರಳುಗಳುಳ್ಳ ಅಂಗೈ
१२. ग्रीवा, कन्धरा = ಕೊರಳು
१३. आननम्, वदनम् = ಮುಖ, ಬಾಯಿ
१४. घ्राणम्, नासिका=ಮೂಗು
१५. ओष्ठः, अधरः = ತುಟಿ
१६. रदनः, दशनः = ಹಲ್ಲು
१७. रसना, जिह्वा = ನಾಲಿಗೆ
१८. ललाटम् = ಹಣೆ
१९. लोचनम्, नयनम्=ಕಣ್ಣು
२०. कर्णः, श्रोत्रम् = ಕಿವಿ
२१. उत्तमाङ्गम्, मस्तकः = ತಲೆ
२२. चिकुरः, केशः = ತಲೆ ಗೂದಲು
२३. अलका, चूर्णकुन्तला = ಮುಂಗುರುಳು
२४. कुण्डलम् = ಕರ್ಣಾಭರಣ
२५. ग्रैवेयकम् = ಕಂಠಮಾಲೆ
२६. हारः, मुक्तावली = ಮುತ್ತಿನ ಹಾರ
२७. नूपुरः, मञ्जीरः = ರುಳಿ, ಕಾಲ್ಗಡಗ
२८. दुकूलम् = ಬಿಳೀ ಪಟ್ಟೇ ಸೀರೆ, ತೆಳುವಾದ ವಲ್ಲಿ
२९. उद्वर्तनम्=ಸ್ನಾನದ ಹಿಟ್ಟು, ಶೀಗೆಪುಡಿ
३०. कङ्कतिका = ಬಾಚಣಿಗೆ

## ಅಭ್ಯಾಸ ೧೨

ಕೆಳಗಿನ ವಾಕ್ಯಗಳನ್ನು ಸಂಸ್ಕೃತ ಭಾಷೆಗೆ ಅನುವಾದ ಮಾಡಿರಿ :—

೧. ಆ ಉಂಗುರವು ಯಾರದ್ದು? ೨. ಕೃಷ್ಣನು ಶರೀರವನ್ನು ಅಲಂಕರಿಸಿಕೊಳ್ಳುತ್ತಾನೆ. ೩. ಅವನ ಹೊಟ್ಟೆಯಲ್ಲಿ ನೋವಿದೆ. ೪. ಅನಿಲನು ಕೈಯಿಂದ ಅಡಿಗೆ ಮಾಡುತ್ತಾನೆ. ೫. ಅವನ ಹೆಗಲು ಗಟ್ಟಿ ಮುಟ್ಟಾಗಿದೆ. ೬. ಅವನು ಕೊರಳಲ್ಲಿ ತೆಳುವಾದ ವಲ್ಲಿಯನ್ನು ಧರಿಸು ತ್ತಾನೆ. ೭. ಅವನ ಮುಖದಲ್ಲಿ ದುಃಖವಿಲ್ಲ. ೮. ಹೆಂಗಸರು ಮೂಗಿನಲ್ಲಿ ಒಡವೆಗಳನ್ನು ಧರಿಸುತ್ತಾರೆ. ೯. ಅವನ ಹಣೆಯಲ್ಲಿ ಚಂದನದ ತಿಲಕ ವಿದೆ. ೧೦. ಹಲ್ಲುಗಳ ಮಧ್ಯೆ ನಾಲಿಗೆ ಇರುತ್ತದೆ. ೧೧. ಆ ಮುಂಗುರುಳು ಗಳು ಸುಂದರವಾಗಿವೆ. ೧೨. ನನ್ನ ಹತ್ತಿರ ಕಂಠಮಾಲೆ ಇದೆ. ೧೩. ಏನು, ನೀನು ಸ್ನಾನದ ಪುಡಿಯಿಂದ ಸ್ನಾನ ಮಾಡುವೆಯಾ? ೧೪. ಆ ರಾಜನ ಹತ್ತಿರ ಮುತ್ತಿನ ಹಾರವಿದೆ. ೧೫. ನನ್ನ ಹತ್ತಿರ ಹಾರವಿಲ್ಲ.

## ऋकारान्त कर्तृ शब्दः

कर्तृ = ಮಾಡುವವನು

| एकवचन | बहुवचन | |
|---|---|---|
| कर्ता | कर्तारः | प्रथमा |
| कर्तारम् | कर्तॄन् | द्वितीया |
| कर्त्रा | कर्तृभिः | तृतीया |
| कर्त्रे | कर्तृभ्यः | चतुर्थी |
| कर्तुः | कर्तृभ्यः | पञ्चमी |
| कर्तुः | कर्तॄणाम् | षष्ठी |
| कर्तरि | कर्तृषु | सप्तमी |
| कर्तः | कर्तारः | सम्बोधनम् |

# ऋकारान्त पितृ शब्दः

| एकवचन | बहुवचन | |
|---|---|---|
| पिता | पितरः | प्रथमा |
| पितरम् | पितॄन् | द्वितीया |

ಉಳಿದ ವಿಭಕ್ತಿಗಳ ರೂಪಗಳು ಕರ್ತೃ ಶಬ್ದದ ರೂಪಗಳಂತೆಯೇ ನಡೆಯುವವು.

ಈ ಕೆಳಗಿನ ಶಬ್ದಗಳ ರೂಪಗಳೂ ಸಹ ಕರ್ತೃ ಶಬ್ದಗಳಂತೆಯೇ ಇರುವವು.

धातृ = ಧರಿಸುವವನು (ಬ್ರಹ್ಮ), दातृ = ದಾನಮಾಡುವವ,
वक्तृ = ಮಾತಾಡುವವ, श्रोतृ = ಕೇಳುವವ,
सवितृ = ಸೂರ್ಯ.

## ಅಭ್ಯಾಸ ೧೩

ಕನ್ನಡಕ್ಕೆ ಅನುವಾದ ಮಾಡಿರಿ:—

१. एषा मदीया कङ्कतिका । २. अनया नार्यः केशान् भूषयन्ति । ३. त्वदीयं ग्रैवेयकं शोभनमस्ति । ४. उद्वर्तनं हि बालानांकृते हिताय । ५. नूपुराणां ध्वनिः मधुरा भवति । ६. नूपुरैः नार्यः पादशोभां वर्धयन्ति । ७. भिक्षुकः उदरं मोदकैः पूरयति । ८. सः स्कन्धे दुकूलं धारयति । ९. तस्यारुणं ओष्ठं पश्य । १०. को नु कुण्डलं क्रीणाति ?

## ಕ್ರಿಯಾಪದಗಳು

१. तृप् (तृप्यति) = ತೃಪ್ತಿಹೊಂದು

२. तृष् (तृष्यति) = ಬಾಯಾರು

३. नश् (नश्यति) = ನಾಶಹೊಂದು

४. पुष् (पुष्यति) = ಪುಷ್ಟಿಹೊಂದು

५. शम् (शाम्यति) = ಶಾಂತನಾಗು

६. सीव् (सीव्यति) = ಹೊಲಿಯುವುದು

७. ष्ठिव् (ष्ठीव्यति) = ಉಗುಳು

८. हृष् (हृष्यति) = ಸಂತೋಷಪಡು ಗೊಳ್ಳು

९. युध् (युध्यते) = ಯುದ್ಧಮಾಡು

१०. बुध् (बुध्यते) = ತಿಳಿ

## वाक्यानि

दुग्धं पीत्वाहं न तृप्यामि। देवाः अर्घ्येण तृप्यन्तु। दुष्टजनाः स्वयमेव नश्यन्ति। सज्जनः न नश्यति। सः मोदकान् भक्षयित्वा पुष्तति। सः घृतेन पुष्यति। सा बाला वस्त्राणि सीव्यति। शत्रवः परस्परं युध्यन्ते। सः धनं प्राप्य हृष्यति। त्वं तां प्रतिमां दृष्ट्वा किमर्थं हृष्यसि? प्राणायामेन मनः शाम्यति। अत्र मा ष्ठीव्यतु।



## पाठ ७

### कृषिकर्म

गुरुः —कृषकः क्षेत्रेषु किं किं कर्म करोति ?

छात्रः —सः क्षेत्रं गत्वा प्रथमं तावत् हलेन कर्षणं करोति, कर्षयित्वा काशोत्पाटनं, तदनु बीजारोपणं करोति वृत्तिं च बध्नाति।

गु० —सः वृषभाय किं ददाति ?

छा० —वृषभः कृषकस्य परमसहायकः, अतः सः तस्मै चूर्णीतूलशर्करा-खल्ली-प्रभृति यथेच्छं ददाति। सः प्रतिदिनं घासभाराम् रचयित्वा आनयति।

गु० —सायंसमये सः किं करोति ?

छा० —सायंकाले सः निर्दलनं, क्षुरप्रणम् विचयं त्रोटनादिकं च करोति। जलसेचनं सारणीप्रबन्धनं चापि सः सायंकाले करोति।

गु० —कानि खलु सीताद्रव्याणि ?

छा० —अनेकानि द्रव्याणि सन्ति यथा प्राजनीः, कुठारः, लवित्रं, खनित्रं, प्रावणादिकम्।

गु० —कथं हि सः क्षेत्रस्य परिरक्षणं करोति ?

